# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಜೂನ್ ೧೧, ೨೦೧೫ (ಜ್ಯೇಷ್ಠ ೨೧, ಶಕ ವರ್ಷ ೧೯೩೭)<br>Bengaluru, Thursday, June 11, 2015 (Jyeishta 21, Shaka Varsha 1937) | ಸಂಚಿಕೆ ೨೪<br>Issue 24 |
|---|---|---|

## ಭಾಗ ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಕರ್ನಾಟಕ ಲೋಕಸೇವಾ ಆಯೋಗ "ಉದ್ಯೋಗ ಸೌಧ" ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ : ಆರ್(2)649/2014–2015/ಪಿಎಸ್‌ಸಿ, ದಿನಾಂಕ : 27–03–2015.**

ಆಯೋಗದ ಅಧಿಸೂಚನೆ ಸಂಖ್ಯೆ ಆರ್(2)ಪಿಎಸ್‌ಸಿ 1 ಆರ್‌ಟಿಬಿ–1/2011, ದಿನಾಂಕ : 17–05–2011ರಲ್ಲಿ ಸಾರಿಗೆ ಇಲಾಖೆಯಲ್ಲಿನ 100 ಮೋಟಾರು ವಾಹನ ನಿರೀಕ್ಷಕರ ಹುದ್ದೆಗಳನ್ನು ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಹಾಗೂ ಆಯ್ಕೆ) (ಸಾಮಾನ್ಯ) ನಿಯಮಗಳು 2006 ರನ್ವಯ ನೇಮಕಾತಿ ಮಾಡಲು ಅಧಿಸೂಚಿಸಿ ಅರ್ಜಿಗಳನ್ನು ಸ್ವೀಕರಿಸಲು ದಿನಾಂಕ : 16–06–2011 ರಂದು ಕೊನೆಯ ದಿನಾಂಕವೆಂದು ನಿಗದಿಪಡಿಸಲಾಗಿತ್ತು.

ಸಾರಿಗೆ ಇಲಾಖೆ, ಇವರು ಕರ್ನಾಟಕ ಸರ್ಕಾರದ ನಡವಳಿಗಳಲ್ಲಿ ಸರ್ಕಾರವು ದಿನಾಂಕ : 06–03–2015 ರಂದು ಮಾಡಿರುವ ಆದೇಶದಲ್ಲಿ ಅನುಚ್ಛೇಧ 371(ಜೆ)ಗೆ ಸಂಬಂಧಿಸಿದಂತೆ ಹೈದರಾಬಾದ್–ಕರ್ನಾಟಕ ಪ್ರದೇಶದ ಅಭ್ಯರ್ಥಿಗಳಿಗೆ ಮೀಸಲಾತಿಯನ್ನು ಕಲ್ಪಿಸಬೇಕಿದ್ದು, ಈಗಾಗಲೇ ಅಧಿಸೂಚಿಸಿರುವ ಮೋಟಾರು ವಾಹನ ನಿರೀಕ್ಷಕರ 100 ಹುದ್ದೆಗಳಿಗೆ ಅನ್ವಯವಾಗುವುದರಿಂದ, ಪರಿಷ್ಕೃತ ಪ್ರಸ್ತಾವನೆಯನ್ನು ಸಲ್ಲಿಸುವ ಸಲುವಾಗಿ ಸಾರಿಗೆ ಇಲಾಖೆಯಲ್ಲಿನ ಮೋಟಾರು ವಾಹನ ನಿರೀಕ್ಷಕರ ಹುದ್ದೆಗಳನ್ನು ಹಿಂದಕ್ಕೆ ಪಡೆದಿರುತ್ತಾರೆ. ಇವರ ಕೋರಿಕೆಯಂತೆ ದಿನಾಂಕ : 26–05–2011ರ ಕರ್ನಾಟಕ ರಾಜ್ಯಪತ್ರದ ಭಾಗ–5ರಲ್ಲಿ ಪ್ರಕಟವಾದ ಆಯೋಗದ ದಿನಾಂಕ : 17–05–2011 ರಂದು ಹೊರಡಿಸಿರುವ ಅಧಿಸೂಚನೆಯಲ್ಲಿ ಗ್ರೂಪ್–ಸಿ ವಿಭಾಗದ ಅನು ಕ್ರಮ ಸಂಖ್ಯೆ : 107–206 ಮತ್ತು ಹುದ್ದೆಯ ಸಂಕೇತ : 19 ರಲ್ಲಿ ಪ್ರಕಟಿಸಲಾದ ಸಾರಿಗೆ ಇಲಾಖೆಯಲ್ಲಿನ ಮೋಟಾರು ವಾಹನ ನಿರೀಕ್ಷಕರ 100 ಹುದ್ದೆಗಳನ್ನು ಹಿಂಪಡೆಯಲಾಗಿದೆ.

**ಮನೋಜ್ ಕುಮಾರ್ ಮೀನಾ, ಭಾ.ಆ.ಸೇ.**
ಕಾರ್ಯದರ್ಶಿ,
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು

P.R. 112
SC-30

**ಕರ್ನಾಟಕ ಲೋಕಸೇವಾ ಆಯೋಗ "ಉದ್ಯೋಗ ಸೌಧ" ಬೆಂಗಳೂರು**

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ : ಇಪ(4)1222/2014–2015/ಪಿಎಸ್‌ಸಿ, ದಿನಾಂಕ : 27–03–2015.**

2014ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶವನ್ನು ಆಯೋಗದ ಅಧಿಸೂಚನೆ ಸಂಖ್ಯೆ : ಇಪ(1)/1455/ 2014–15/ಪಿಎಸ್‌ಸಿ, ದಿನಾಂಕ : 06–02–2015 ರಂದು ಪ್ರಕಟಿಸಲಾಗಿದ್ದು, ಸದರಿ ಅಧಿವೇಶನದಲ್ಲಿ ಅಭ್ಯರ್ಥಿಯು ಗಳಿಸಿರುವ ಅಂಕಗಳು ಹಾಗೂ ಹಿಂದಿನ ಅಧಿವೇಶನದಲ್ಲಿ ಗಳಿಸಿರುವ ವಿನಾಯಿತಿಯನ್ನು ಪರಿಗಣಿಸಿ ಸಂಬಂಧಿಕರ ಮಾಹಿತಿಗಾಗಿ ಈ ತಿದ್ದುಪಡಿ ಮೂಲಕ ಫಲಿತಾಂಶವನ್ನು ಪ್ರಕಟಿಸಿದೆ.

**ಅಪೆಂಡಿಕ್ಸ್–'ಎ'**

**ಹಾವೇರಿ ಕೇಂದ್ರ**

**ಅಕೌಂಟ್ಸ್ ಹೈಯರ್**

ಸಾಮಾನ್ಯ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ : 168178 ಅನ್ನು ಸೇರಿಸಿ ಓದಿಕೊಳ್ಳುವುದು.

**ಆರ್. ವೆಂಕಟೇಶ್ ಕುಮಾರ್ ಭಾ.ಆ.ಸೇ.**
ಪರೀಕ್ಷಾ ನಿಯಂತ್ರಕರು
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು

**P.R. 116**
**SC-25**

## ಕರ್ನಾಟಕ ಲೋಕಸೇವಾ ಆಯೋಗ "ಉದ್ಯೋಗ ಸೌಧ" ಬೆಂಗಳೂರು

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ : ಇಪ(4)/1216/2014–2015/ಪಿಎಸ್‌ಸಿ, ದಿನಾಂಕ : 23–03–2015.**

2014ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶವನ್ನು ಆಯೋಗದ ಅಧಿಸೂಚನೆ ಸಂಖ್ಯೆ : ಇಪ(1)/1455/2014–15/ಪಿಎಸ್‌ಸಿ, ದಿನಾಂಕ : 06–02–2015 ರಂದು ಪ್ರಕಟಿಸಲಾಗಿದ್ದು, ಸದರಿ ಫಲಿತಾಂಶದಲ್ಲಿ ಅಪೆಂಡಿಕ್ಸ್ 'ಡಿ' ರಡಿ ತಡೆಹಿಡಿಯಲಾಗಿದ್ದು ರಾಮನಗರ ಕೇಂದ್ರದ ನೋಂ. ಸಂ. 176002ರ ಹಾಗೂ ಶಿವಮೊಗ್ಗ ಕೇಂದ್ರದ ನೋಂ. ಸಂ. 178147ರ ಫಲಿತಾಂಶವನ್ನು ಮಾರ್ಪಡಿಸಿ ಸಂಬಂಧಿತರ ಮಾಹಿತಿಗಾಗಿ ಕೆಳಕಂಡಂತೆ ತಿದ್ದುಪಡಿ ಮೂಲಕ ಫಲಿತಾಂಶವನ್ನು ಪ್ರಕಟಿಸಿದೆ.

**ಅಪೆಂಡಿಕ್ಸ್–'ಎ'**

**ರಾಮನಗರ ಕೇಂದ್ರ**

**ಎಸ್.ಎ.ಎಸ್. ಭಾಗ–2**

ಸಾಮಾನ್ಯ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ : 176002 ಅನ್ನು ಸೇರಿಸಿ ಓದಿಕೊಳ್ಳುವುದು.

**ಅಪೆಂಡಿಕ್ಸ್–'ಎ'**

**ಶಿವಮೊಗ್ಗ ಕೇಂದ್ರ**

**ಎಸ್.ಎ.ಎಸ್. ಭಾಗ–3**

ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ : 178147 ಅನ್ನು ಸೇರಿಸಿ ಓದಿಕೊಳ್ಳುವುದು.

**ಆರ್. ವೆಂಕಟೇಶ್ ಕುಮಾರ್ ಭಾ.ಆ.ಸೇ.**
ಪರೀಕ್ಷಾ ನಿಯಂತ್ರಕರು
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು

**P.R. 117**
**SC-25**

## ಕರ್ನಾಟಕ ಲೋಕಸೇವಾ ಆಯೋಗ "ಉದ್ಯೋಗ ಸೌಧ" ಬೆಂಗಳೂರು

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ : ಇಪ(4)1193/2014–2015/ಪಿಎಸ್‌ಸಿ, ದಿನಾಂಕ : 18–03–2015.**

2014ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶವನ್ನು ಆಯೋಗದ ಅಧಿಸೂಚನೆ ಸಂಖ್ಯೆ : ಇಪ(1)/1455/2014–15/ಪಿಎಸ್‌ಸಿ, ದಿನಾಂಕ : 06–02–2015 ರಂದು ಪ್ರಕಟಿಸಲಾಗಿದ್ದು, ಸದರಿ ಅಧಿವೇಶನದಲ್ಲಿ ಅಭ್ಯರ್ಥಿಯು ಗಳಿಸಿರುವ ಅಂಕಗಳು ಹಾಗೂ ಅಭ್ಯರ್ಥಿಯು ಪಡೆದಿರುವ ಕಾನೂನು ಪದವಿಯನ್ನು ಪರಿಗಣಿಸಿ ಸಂಬಂಧಿಕರ ಮಾಹಿತಿಗಾಗಿ ಕೆಳಕಂಡ ತಿದ್ದುಪಡಿಯನ್ನು ಪ್ರಕಟಿಸಿದೆ.

**ಅಪೆಂಡಿಕ್ಸ್–'ಬಿ'**

**ಬೆಳಗಾವಿ ಕೇಂದ್ರ**

**ಜನರಲ್ ಲಾ ಭಾಗ–1**

ಪತ್ರಿಕೆ–2ರಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ : 154016 ಅನ್ನು ಸೇರಿಸಿ ಓದಿಕೊಳ್ಳುವುದು.

**ಆರ್. ವೆಂಕಟೇಶ್ ಕುಮಾರ್ ಭಾ.ಆ.ಸೇ.**
ಪರೀಕ್ಷಾ ನಿಯಂತ್ರಕರು
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು

**P.R. 118**
**SC-25**

## ಕರ್ನಾಟಕ ಲೋಕಸೇವಾ ಆಯೋಗ "ಉದ್ಯೋಗ ಸೌಧ" ಬೆಂಗಳೂರು

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ : ಇಪ(4)/1221/2014–2015/ಪಿಎಸ್‌ಸಿ, ದಿನಾಂಕ : 27–03–2015.**

2013ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶವನ್ನು ದಿನಾಂಕ : 03–07–2014ರ ರಾಜ್ಯ ಪತ್ರದಲ್ಲಿ ಆಯೋಗದ ಅಧಿಸೂಚನೆ ಸಂಖ್ಯೆ : ಇಪ(1)394/2014–15/ಪಿಎಸ್‌ಸಿ, ದಿನಾಂಕ : 30–04–2014ರಡಿ ಪ್ರಕಟಿಸಲಾಗಿದ್ದು, ಸದರಿ ಅಧಿವೇಶನದಲ್ಲಿ ಅಭ್ಯರ್ಥಿಗಳು ಗಳಿಸಿರುವ ಅಂಕಗಳು ಹಾಗೂ ಹಿಂದಿನ ಅಧಿವೇಶನದಲ್ಲಿ ಗಳಿಸಿರುವ ವಿನಾಯಿತಿಯನ್ನು ಮತ್ತು ಬಿ.ಕಾಂ. ಪದವಿಯನ್ನು ಪರಿಗಣಿಸಿ ಸಂಬಂಧಿತರ ಮಾಹಿತಿಗಾಗಿ ಈ ತಿದ್ದುಪಡಿಯ ಮೂಲಕ ಫಲಿತಾಂಶವನ್ನು ಪ್ರಕಟಿಸಿದೆ.

**ಅಪೆಂಡಿಕ್ಸ್–'ಬಿ'**

**ಬೆಂಗಳೂರು ಕೇಂದ್ರ**

**ಎಸ್‌ಎಎಸ್ ಭಾಗ–3**

ಪತ್ರಿಕೆ–2 ರಿಂದ 5 ರವರೆಗೆ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ : 50195, 51332 ಹಾಗೂ 53475 ಗಳನ್ನು ಸೇರಿಸಿ ಓದಿಕೊಳ್ಳುವುದು.

**ಆರ್. ವೆಂಕಟೇಶ್ ಕುಮಾರ್ ಭಾ.ಆ.ಸೇ.**
ಪರೀಕ್ಷಾ ನಿಯಂತ್ರಕರು
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು

**P.R. 119**
**SC-25**

## ವಿಭಾಗೀಯ ಕಾರ್ಯದರ್ಶಿಗಳು, ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ಹಾಗೂ ಪದನಿಮಿತ್ತ ಜಂಟಿ ನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಮೈಸೂರು ವಿಭಾಗ, ಮೈಸೂರು–570024

**ತಿದ್ದುಪಡಿ ಜ್ಞಾಪನ**

**ಸಂಖ್ಯೆ : ಜಿ12/ಪ್ರೌ.ಶಾ.ಶಿ.ನೇ/01/391/2014–15, ದಿನಾಂಕ : 23–04–2015.**

**ವಿಷಯ :** 2014–15ನೇ ಸಾಲಿನ ಸಾರ್ವಜನಿಕ ಶಿಕ್ಷಣ ಇಲಾಖೆಯ ಮೈಸೂರು ವಿಭಾಗದ ಪ್ರೌಢ ಶಾಲಾ ಸಹ ಶಿಕ್ಷಕರ ನೇಮಕಾತಿ ಅಧಿಸೂಚನೆಯಲ್ಲಿನ ತಿದ್ದುಪಡಿ ಬಗ್ಗೆ.

**ಉಲ್ಲೇಖ :** 1. ಈ ಕಛೇರಿ ಅಧಿಸೂಚನೆ ಸಂಖ್ಯೆ : ಜಿ12/ಪ್ರೌ.ಶಾ.ಶಿ.ನೇ./01/14–15, ದಿನಾಂಕ : 23–03–2015.

2. ನಿರ್ದೇಶಕರು (ಪ್ರೌಢ ಶಿಕ್ಷಣ) ಆಯುಕ್ತರ ಕಛೇರಿ, ಬೆಂಗಳೂರು ಇವರ ದೂರವಾಣಿ ಕರೆ ದಿನಾಂಕ : 17–04–2015ರ ಮೇರೆಗೆ

ಉಲ್ಲೇಖ (1)ರಲ್ಲಿ ಹೊರಡಿಸಲಾಗಿದ್ದ ನೇಮಕಾತಿ ಅಧಿಸೂಚನೆಯ ಪುಟ ಸಂಖ್ಯೆ 02ರ ಅನುಬಂಧ–02ರ ಅಧಿಸೂಚಿತ ಹುದ್ದೆಗಳ ವರ್ಗೀಕರಣದಲ್ಲಿ ಆಯ್ಕೆ ಪಟ್ಟಿಯನ್ನು ಪ್ರಕಟಿಸುವಾಗ ಸಮತಳ ಮೀಸಲಾತಿಗೆ ಸಂಬಂಧಿಸಿದಂತೆ ಗೌರವಾನ್ವಿತ ಸರ್ವೋಚ್ಚ ನ್ಯಾಯಾಲಯವು ವಿವರಿಸಿರುವ ಕಾರ್ಯ ವಿಧಾನವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ : ಸಿಆಸುಇ 16/ನೆರನಿ/2008, ದಿನಾಂಕ : 01–09–2008ರಲ್ಲಿ ಆದೇಶಿಸಿರುವಂತೆ ಹಾಗೂ ಹೈದರಾಬಾದ್–ಕರ್ನಾಟಕ ಮೀಸಲಾತಿ ನಿಯಮ 371ಜೆ ಪ್ರಕಾರ ಅಳವಡಿಸಿಕೊಳ್ಳಲಾಗಿತ್ತು. ಆದರೆ ಈ ಮೀಸಲಾತಿಯು ಈ ವಿಭಾಗಕ್ಕೆ ಅನ್ವಯಿಸದ ಕಾರಣ ಪ್ರಕಟಣೆಯಲ್ಲಿ ತಿಳಿಸಿರುವುದನ್ನು ಕೈಬಿಟ್ಟು ಓದಿಕೊಳ್ಳುವಂತೆ ತಿಳಿಸಲಾಗಿದೆ.

**ಸಿ. ಬಾಮೇಗೌಡ**
ವಿಭಾಗೀಯ ಕಾರ್ಯದರ್ಶಿಗಳು
ಮತ್ತು ಪದನಿಮಿತ್ತ ಜಂಟಿ ನಿರ್ದೇಶಕರು,
ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಸಾರ್ವಜನಿಕ ಶಿಕ್ಷಣ ಇಲಾಖೆ,
ಮೈಸೂರು ವಿಭಾಗ, ಮೈಸೂರು.

**P.R. 130**
**SC-10**

## ಆಯ್ಕೆ ಪ್ರಾಧಿಕಾರಿ/ಕಾರ್ಯದರ್ಶಿಗಳು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಹಾಗೂ ಪದನಿಮಿತ್ತ ಸಹ ನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಳಗಾವಿ ವಿಭಾಗ, ಬೆಳಗಾವಿ

**ತಿದ್ದುಪಡಿ ಜ್ಞಾಪನ**

**ಸಂಖ್ಯೆ : ಇ1/ಪ್ರೌ.ಶಾ.ಶಿ.ನೇ/01/2014–15, ದಿನಾಂಕ : 25–04–2015.**

**ವಿಷಯ :** 2014–15ನೇ ಸಾಲಿನ ಸಾರ್ವಜನಿಕ ಶಿಕ್ಷಣ ಇಲಾಖೆಯ ಬೆಳಗಾವಿ ವಿಭಾಗದ ಪ್ರೌಢ ಶಾಲಾ ಸಹ ಶಿಕ್ಷಕರ ನೇಮಕಾತಿ ಅಧಿಸೂಚನೆಯಲ್ಲಿನ ತಿದ್ದುಪಡಿ ಬಗ್ಗೆ.

**ಉಲ್ಲೇಖ :** 1. ಕರ್ನಾಟಕ ರಾಜ್ಯ ಪತ್ರ ಗುರುವಾರ 02 ಏಪ್ರಿಲ್–2015

2. ಮಾನ್ಯ ನಿರ್ದೇಶಕರು (ಪ್ರೌ.ಶಿ) ಸಾ.ಶಿ. ಇಲಾಖೆ ಆಯುಕ್ತರ ಕಛೇರಿ ಬೆಂಗಳೂರು ಇವರ ಪತ್ರ ಸಂಖ್ಯೆ : ಸಿ4(1)ಪೌಶಿನೇ–01/2014–15, ದಿನಾಂಕ : 19–03–2015 ಹಾಗೂ ದೂರವಾಣಿ ಸಂದೇಶ, ದಿನಾಂಕ : 17/25–04–2015,

3. ಈ ಕಛೇರಿ ಪತ್ರ ಸಮ ಸಂಖ್ಯೆ : ದಿನಾಂಕ : 09/26–03–2015.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಉಲ್ಲೇಖ (1)ರಲ್ಲಿ ಹೊರಡಿಸಲಾಗಿದ್ದ ನೇಮಕಾತಿ ಅಧಿಸೂಚನೆಯ ಪುಟ ಸಂಖ್ಯೆ 1216ರ ಅನುಬಂಧ 02ರ ಅನುಸೂಚಿತ ಹುದ್ದೆಗಳ ವರ್ಗೀಕರಣದಲ್ಲಿ ಆಯ್ಕೆ ಪಟ್ಟಿಯನ್ನು ಪ್ರಕಟಿಸುವಾಗ "ಮುಂದುವರೆದು ಆಯ್ಕೆ ಪಟ್ಟಿಯನ್ನು ತಯಾರಿಸುವಾಗ ಸಮತಳ ಮೀಸಲಾತಿಗೆ ಸಂಬಂಧಿಸಿದಂತೆ ಗೌರವಾನ್ವಿತ ಸರ್ವೋಚ್ಚ ನ್ಯಾಯಾಲಯವು ವಿವರಿಸಿರುವ ಕಾರ್ಯವಿಧಾನವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ : ಸಿಆಸುಇ 16/ಸೇನೇನಿ/2008, ದಿನಾಂಕ : 01–09–2008ರಲ್ಲಿ ಆದೇಶಿಸಿರುವಂತೆ ಅಳವಡಿಸಿಕೊಳ್ಳಲಾಗುವುದು" ಎಂದು ಪ್ರಕಟಣೆಯಲ್ಲಿ ತಿಳಿಸಿರುವುದನ್ನು ಕೈಬಿಟ್ಟು ಓದಿಕೊಳ್ಳುವಂತೆ ತಿಳಿಸಲಾಗಿದೆ.

**ಎ.ಎಂ. ಮಡಿವಾಳರ**
ಆಯ್ಕೆ ಪ್ರಾಧಿಕಾರಿ/ಕಾರ್ಯದರ್ಶಿಗಳು,
ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಹಾಗೂ
ಪದನಿಮಿತ್ತ ಸಹ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ,
ಬೆಳಗಾವಿ ವಿಭಾಗ, ಬೆಳಗಾವಿ.

**P.R. 131**
**SC-10**

## ಕರ್ನಾಟಕ ಲೋಕಸೇವಾ ಆಯೋಗ "ಉದ್ಯೋಗ ಸೌಧ" ಬೆಂಗಳೂರು

### ಅಧಿಸೂಚನೆ

**ಸಂಖ್ಯೆ : ಪಿಎಸ್‌ಸಿ 04 ಆರ್‌ಟಿಬಿ 2012, ದಿನಾಂಕ : 02–05–2015.**

ಆಯೋಗದ ಅಧಿಸೂಚನೆ ಸಂಖ್ಯೆ ಪಿಎಸ್‌ಸಿ 01 ಆರ್‌ಟಿಬಿ–1/2012, ದಿನಾಂಕ : 22–11–2012ರಲ್ಲಿ ಸಾರಿಗೆ ಇಲಾಖೆಯಲ್ಲಿನ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ 09 ಹುದ್ದೆಗಳನ್ನು ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಹಾಗೂ ಆಯ್ಕೆ) (ಸಾಮಾನ್ಯ) ನಿಯಮಗಳು 2006 ರನ್ವಯ ನೇಮಕಾತಿ ಮಾಡಲು ಅಧಿಸೂಚಿಸಿ ಅರ್ಜಿಗಳನ್ನು ಸ್ವೀಕರಿಸಲು ದಿನಾಂಕ : 26–12–2012 ರಂದು ಕೊನೆಯ ದಿನಾಂಕವೆಂದು ನಿಗದಿಪಡಿಸಲಾಗಿತ್ತು.

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಾರಿಗೆ ಇಲಾಖೆ, ಇವರು ದಿನಾಂಕ : 15–04–2015ರ ಪತ್ರದಲ್ಲಿ ಅನುಚ್ಛೇದ 371(ಜೆ) ಗೆ ಸಂಬಂಧಿಸಿದಂತೆ ಹೈದರಾಬಾದ್–ಕರ್ನಾಟಕ ಪ್ರದೇಶದ ಅಭ್ಯರ್ಥಿಗಳಿಗೆ ಮೀಸಲಾತಿಯನ್ನು ಕಲ್ಪಿಸಬೇಕಿದ್ದು, ಈಗಾಗಲೇ ಅಧಿಸೂಚಿಸಿರುವ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಹುದ್ದೆಗಳಿಗೆ ಹೈದ್ರಾಬಾದ್–ಕರ್ನಾಟಕ ಪ್ರದೇಶದ ಮೀಸಲಾತಿಯು ಅನ್ವಯವಾಗುವುದರಿಂದ, ಈ ಹಿಂದೆ ದಿನಾಂಕ : 22–11–2012 ರಂದು ಅಧಿಸೂಚಿಸಿದ್ದ ಸಾರಿಗೆ ಇಲಾಖೆಯಲ್ಲಿನ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಹುದ್ದೆಗಳನ್ನು ಹಿಂದಕ್ಕೆ ಪಡೆಯುವಂತೆ ಕೋರಿರುತ್ತಾರೆ. ಇಲಾಖೆಯ ಕೋರಿಕೆಯಂತೆ ದಿನಾಂಕ : 29–11–2012ರ ಕರ್ನಾಟಕ ರಾಜ್ಯ ಪತ್ರದ ಭಾಗ–5 ರಲ್ಲಿ ಪ್ರಕಟವಾದ ಆಯೋಗದ ದಿನಾಂಕ : 22–11–2012 ರಂದು ಹೊರಡಿಸಿರುವ ಅಧಿಸೂಚನೆಯಲ್ಲಿ ಅನುಕ್ರಮ ಸಂಖ್ಯೆ : 64–72 ರಲ್ಲಿ ಪ್ರಕಟಿಸಲಾಗಿದ್ದ ಸಾರಿಗೆ ಇಲಾಖೆಯಲ್ಲಿನ 09 ಪ್ರಾದೇಶಿಕ ಸಾರಿಗೆ ಅಧಿಕಾರಿ ಹುದ್ದೆಗಳನ್ನು ಹಿಂಪಡೆಯಲಾಗಿದೆ.

**ಆರ್. ವೆಂಕಟೇಶ್ ಕುಮಾರ್ ಭಾ.ಆ.ಸೇ.**
ಪರೀಕ್ಷಾ ನಿಯಂತ್ರಕರು
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

**P.R. 136**
**SC-30**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59